ಲಿಖಿತ ಮೂಲಕ ಉತ್ತರಿಸುವ ಪ್ರಶ್ನೆ



ಕರ್ನಾಟಕ ವಿಧಾನ ಪರಿಷತ್ತು

ನೂರ ನಲವತ್ತನೆಯ ಅಧಿವೇಶನ

ಶುಕ್ರವಾರ, ದಿನಾಂಕ : 20 ನೇ ಮಾರ್ಚ್, 2020

ಆಡಳಿತದಲ್ಲಿ ಕನ್ನಡ ಬಳಕೆ

ಶ್ರೀ ಆರ್. ಧರ್ಮಸೇನ(ಸ್ಥಳೀಯ ಸಂಸ್ಥೆಗಳ ಕ್ಷೇತ್ರ):-

1346 (1639) ಮಾನ್ಯ ಪ್ರವಾಸೋದ್ಯಮ, ಕನ್ನಡ ಮತ್ತು ಸಂಸ್ಕೃತಿ ಹಾಗೂ ಯುವ ಸಬಲೀಕರಣ ಮತ್ತು ಕ್ರೀಡಾ ಸಚಿವರು ಈ ವಿಷಯಗಳನ್ನು ದಯವಿಟ್ಟು ತಿಳಿಸುವರೆ:-

(ಅ) ಸರ್ಕಾರದ ಭಾಷಾ ನೀತಿಯಂತೆ ಸರ್ಕಾರಿ ಕಛೇರಿಗಳಲ್ಲಿ ಕನ್ನಡ ಬಳಕೆ ಸಮರ್ಪಕವಾಗಿ ಆಗುತ್ತಿದೆಯೇ ಎಂಬುದನ್ನು ತಪಾಸಣೆ ಮಾಡಲು ಸರ್ಕಾರದಲ್ಲಿ ಯಾವ ವ್ಯವಸ್ಥೆ ಇದೆ ; ತಪಾಸಣೆ ಮಾಡುವವರು ಯಾರು ;

(ಆ) ಹಿಂದೆ ಕನ್ನಡ ಅಭಿವೃದ್ಧಿ ಪ್ರಾಧಿಕಾರದ ಅಧ್ಯಕ್ಷರು ಸರ್ಕಾರಿ ಕಛೇರಿಗಳಿಗೆ ಭೇಟಿ ನೀಡಿ ಕಡತಗಳಲ್ಲಿ ಕನ್ನಡ ಬಳಸದಿರುವ ಅಧಿಕಾರಿಗಳಿಗೆ ನೋಟಿಸ್ ನೀಡಿ ಕ್ರಮ ಕೈಗೊಳ್ಳುವ ಪದ್ಧತಿ ಜಾರಿಯಲ್ಲಿದ್ದ ಪ್ರಸ್ತುತ ಈ ಪದ್ಧತಿಯನ್ನು ಮುಂದುವರೆಸಲಾಗಿದೆಯೇ ;

(ಇ) ಆಡಳಿತದಲ್ಲಿ ಕನ್ನಡ ಬಳಕೆ ಮಾಡದ ಎಷ್ಟು ಅಧಿಕಾರಿಗಳ ಮೇಲೆ ಕ್ರಮ ಕೈಗೊಳ್ಳಲಾಗಿದೆ ; (ಕಳೆದ ಎರಡು ವರ್ಷಗಳ ಮಾಹಿತಿ ನೀಡುವುದು)

(ಈ) ಕಛೇರಿಗಳಲ್ಲಿ ಕನ್ನಡ ಬಳಕೆಗೆ ಪೂರಕವಾದ ಕಛೇರಿ ಕೈಪಿಡಿ, ಆಡಳಿತ ಪದಕೋಶ ಮುಂತಾದ ಪುಸ್ತಕಗಳನ್ನು ಇಲಾಖೆಯಿಂದ ಸರ್ಕಾರಿ ಕಛೇರಿಗಳಿಗೆ ಹಂಚಿಕೆ ಮಾಡಲಾಗುತ್ತಿತ್ತು ; ಪ್ರಸ್ತುತ ಹಂಚಿಕೆ ಮಾಡುವುದನ್ನು ಮುಂದುವರೆಸಲಾಗಿದೆಯೇ ?